# ಮುಂಜಾವು

ವಾರಪತ್ರಿಕೆ.

ಸಂಪಾದಕ: ಸಿರಿಮನೆ ನಾಗರಾಜ್

'MUNJAVU' Kannada Weekly. KOPPA - CHM. ಫೋನ್: 114

5ನೇ ವರ್ಷ 26ನೇ ಸಂಚಿಕೆ ಕೊಪ್ಪ 15-3-1987 ಭಾನುವಾರ ಬೆಲೆ 50 ಪೈಸೆ




## ಶೃಂಗೇರಿತಾ॥ ಹಾದಿ ಮಂಡಲ: ಎರಡೂ ಸ್ಥಾನ ಜನತಾಕ್ಕೆ

ಶೃಂಗೇರಿ: ಕಾಂಗ್ರೆಸ್ ಅಭ್ಯರ್ಥಿಯಾಗಿದ್ದ ಎಂ.ಎಸ್. ಕೃಷ್ಣಮೂರ್ತಿಯವರ ನಿಧನದಿಂದ ಮುಂದೂಡಲ್ಪಟ್ಟಿದ್ದ ಹಾದಿ ಕ್ಷೇತ್ರದ (ನೆಮ್ಮಾರು ಮಂಡಲ) ಮರು ಚುನಾವಣೆಯಲ್ಲಿ ಎರಡೂ ಸ್ಥಾನಗಳನ್ನು ಜನತಾ ಪಕ್ಷ ಗೆದ್ದಿದೆ. ಎಚ್. ಜಿ ದೇವೇಂದ್ರ (292) ಆನಂದರಾವ್ (273)ರನ್ನೂ, ಮರಿಯ (258) ಕೆಂಪೇ ಗೌಡರನ್ನೂ (237) ಸೋಲಿಸಿದ್ದಾರೆ. ಇದರಿಂದ ನೆಮ್ಮಾರು ಮಂಡಲದಲ್ಲಿ ಜನತಾ 7 ಸ್ಥಾನವನ್ನೂ ಕಾಂಗ್ರೆ 1ನ್ನೂ ಗೆದ್ದಂತಾಗಿದೆ.

# ಕೊಪ್ಪ ಗಿರಿಜನ ಸೊಸೈಟಿ ಕಾರ್ಯದರ್ಶಿಗೆ ಕಡ್ಡಾಯ ರಜೆ

**ಕೊಪ್ಪ: ಇಲ್ಲಿನ ಗಿರಿಜನ ದೊಡ್ಡ ಪ್ರಮಾಣದ ವಿವಿಧೋದ್ದೇಶ ಸಹಕಾರ ಸಂಘದ (ಲ್ಯಾಂಪ್ ಸೊಸೈಟಿ) ಕಾರ್ಯದರ್ಶಿಯಾಗಿದ್ದ ಮುರಗೋಡ್‌ರಿಂದ ಅಧಿಕಾರ ಹಿಂತೆಗೆದುಕೊಂಡು ಅವರನ್ನು ಕಡ್ಡಾಯ ರಜೆಯ ಮೇಲೆ ಕಳಿಸಲಾಗಿದೆ.**

ಸಹಕಾರ ಸಂಘಗಳ ಡೆಪ್ಯುಟಿ ರಿಜಸ್ಟ್ರಾರ್ ಅವರ ಹಾಜರಿಯಲ್ಲಿ ಈಚೆಗೆ ನಡೆದ ಸಂಘದ ಆಡಳಿತ ಮಂಡಳಿ ಸಭೆ ಈ ನಿರ್ಣಯ ತೆಗೆದುಕೊಂಡಿತೆನ್ನಲಾಗಿದೆ.

ಆದರೆ ಮುರಗೋಡ್ ತಮ್ಮ ವಶ ಇದ್ದ ರಿಜಿಸ್ಟರು ಮತ್ತಿತರ ದಾಖಲೆಗಳು ಹಾಗೂ ಬೀಗದ ಕೈಗಳನ್ನೂ ಕೊಡಲು ನಿರಾಕರಿಸಿ, ತಮ್ಮಲ್ಲಿಯೇ ಇಟ್ಟುಕೊಂಡಿದ್ದಾರೆನ್ನಲಾಗಿದೆ. ತಾತ್ಕಾಲಿಕ ಬದಲಿ ವ್ಯವಸ್ಥೆ ಮಾಡಿಕೊಳ್ಳಲಾಗಿದ್ದು, ಮೇಲಧಿಕಾರಿಗಳಿಗೆ ಈ ಕುರಿತು ಸೂಕ್ತ ಕ್ರಮ ಕೋರಿ ವರದಿ ಮಾಡಲಾಗಿದೆ.

ಸರ್ಕಾರಿ ನೌಕರನಾದ ಈ ಕಾರ್ಯದರ್ಶಿಯ ಬೇಜವಾಬ್ದಾರಿತನ ಮತ್ತು ಅಸಮರ್ಪಕ ಕಾರ್ಯ ನಿರ್ವಹಣೆಯಿಂದ ಸಂಘ ಮತ್ತು ಅದರ ಶಾಖೆಗಳು ಪಡಿತರ ವಸ್ತುಗಳ ವಹಿವಾಟನ್ನು ಸಹ ನಡೆಸಲಾಗದೆ ತತ್ತರಿಸುತ್ತಿದ್ದ ಬಗ್ಗೆ ನಮ್ಮ ಪತ್ರಿಕೆಯ 1 2.87ರ ಸಂಚಿಕೆಯಲ್ಲಿ ಪ್ರಕಟವಾದ್ದನ್ನು ಇಲ್ಲಿ ನೆನೆಯಬಹುದು.

## ಚಿಕ್ಕಮಗಳೂರು-ಜಯಪುರ-ಶೃಂಗೇರಿ Via ಬಿ.ಜಿ.ಕಟ್ಟೆ,ಬೆಳವಿನಕುಡಿಗೆ,ಕಾಡು,ಗುಡ್ಡ..!

ಜಯಪುರ: ಚಿಕ್ಕಮಗಳೂರಿನ ಮೇಲಿಂದ ಶೃಂಗೇರಿಗೆ ಹೋಗಲು ಬರುವ ಪ್ರವಾಸಿ ವಾಹನಗಳು ಇಲ್ಲಿಂದ ಶೃಂಗೇರಿ ಕಡೆಗೆ ತಿರುಗಲು ತಿಳಿಯದೆ ಕೊಪ್ಪದ ರಸ್ತೆಯಲ್ಲಿ ಮುಂದುವರಿದು, ಬಿ ಜಿ. ಕಟ್ಟೆಯಲ್ಲಿ 'ಶೃಂಗೇರಿಗೆ' ಎಂಬ ಬೋರ್ಡಿರುವ ಟಾರು ರಸ್ತೆ ಕಂಡೊಡನೆ ಅಲ್ಲಿ ಹೋಗಿ, ಬೆಳವಿನಕೊಡಿಗೆ ಶಾಲೆಯ ಬಳಿ ಅಗಲವಾಗಿ ಕಾಣುವ ಹಳ್ಳಿಯ ರಸ್ತೆಯೊಂದರಲ್ಲಿ ಮುಂದುವರಿದಂತೆ ಕಲ್ಲು-ಕೊರಕಲುಗಳಲ್ಲಿ ಏದುಸಿರು ಬಿಡುತ್ತ ದಿಕ್ಕುಗಾಣದೆ ನಿಂತುಕೊಳ್ಳುವ ಪರಿಪಾಠ ಇನ್ನೂ ಮುಂದುವರೆದಿದೆ.

ಈ ಬಗ್ಗೆ 'ಮುಂಜಾವು' 15.2.87ರ ಸಂಚಿಕೆಯಲ್ಲಿ ವರದಿ ಬಂದಮೇಲೂ ಮತ್ತೆ ಸಹ ಐದಾರು ವಾಹನಗಳು ಹೀಗೆ ಬಂದಿವೆಯೆಂದು ಬೆಳವಿನಕೊಡಿಗೆಯ ನೂತನ ಪಂಚಾಯತ್ ಸದಸ್ಯ ಬಿ. ಕೆ. ರಮೇಶ್ ತಿಳಿಸಿದ್ದಾರೆ.

ಈ ರಸ್ತೆಯ ಬೆಳವಿನ ಕೊಡಿಗೆ ಏರಿನಲ್ಲಿ 600 ಮೀ. ಗಳಷ್ಟು ದೂರ ಟಾರು ಹಾಕಿಸಲಾಗುವುದಂತೆ. ಹಾಗೆ ಸದ್ಯಕ್ಕೆ ಕೇವಲ 'ಪ್ಯಾಚ್ ವರ್ಕ್' ಮಾತ್ರ ಮಾಡುವುದಾದರೂ ಇಲ್ಲೇ ಇನ್ನೂ ಸುಮಾರು 600ಮೀ. ಗಳಷ್ಟು ಹಾಗೂ ಎತ್ತಿನಹಟ್ಟಿ-ಅಗಳಗಂಡಿ ಮಧ್ಯದ ಏರಿಗೆ 1 ಕಿ.ಮೀ. ನಷ್ಟು ದೂರ ಟಾರು ಅತಿ ಅಗತ್ಯವಾಗಿದೆ ಎಂದು ಅವರು ತಿಳಿಸಿದ್ದಾರೆ.

## ಅಪರಿಚಿತ ಶವ ಪತ್ತೆ

ಕೊಪ್ಪ : ಮಲಯಾಳಿ ಚಹರೆ ಇರುವ, 55-60 ವರ್ಷ ಪ್ರಾಯದ ಅಪರಿಚಿತ ವ್ಯಕ್ತಿಯೊಬ್ಬನ ಶವ ಎಸ್.ಎಂ. ಪ್ಲಾಂಟೇಶನ್ ಬಳಿ ಮಾ. 9ರಂದು ಪತ್ತೆಯಾಗಿದೆ. ವ್ಯಕ್ತಿ ವಿಪರೀತ ವಿಷ ಸೇವಿಸಿರುವನೆನ್ನಲಾಗಿದ್ದು, ಕೊಪ್ಪ ಪೋಲೀಸರು ಮಹಜರು ನಡೆಸಿ, ಶವ ಪರೀಕ್ಷೆ ನಂತರ ದಫನ್ ಮಾಡಿದರು. ವಿಸೆರಾವನ್ನು ರಾಸಾಯನಿಕ ಪರೀಕ್ಷೆಗೆ ಕಳಿಸಲಾಗಿದೆ.

## ಹಾಲು: ಫೆಬ್ರವರಿ ಹಣ, ಫೀಡ್ಸ್ ಇನ್ನೂ ಇಲ್ಲ

ಕೊಪ್ಪ: ಈ ಕ್ಷೇತ್ರದಲ್ಲಿ ಈಚೆಗೆ ಹೊಸದಾಗಿ ಆರಂಭಿಸಲ್ಪಟ್ಟ ಹಾಲು ಉತ್ಪಾದಕರ ಸಹಕಾರ ಸಂಘಗಳಿಗೆ ಫೆಬ್ರವರಿ ತಿಂಗಳ ಬಿಲ್ ಇನ್ನೂ ಬಂದಿಲ್ಲ ಹಾಗೂ ಮಾ. 4ರಂದೇ ಒಂದು ಲೋಡು ಪಶು ಆಹಾರ ಕಳಿಸುತ್ತೇವೆಂದು ಅಧಿಕಾರಿಗಳು ಕೊಟ್ಟ ಮಾತನ್ನೂ ಈಡೇರಿಸಿಲ್ಲ.

ನಮ್ಮ 1.3.87ರ ಸಂಚಿಕೆಯ 'ಸಹಕಾರಿ ರಂಗಕ್ಕೆ ಅಧಿಕಾರಿಗಳ ಅಸಹಕಾರ' ಎಂಬ ವರದಿಯ ಪರಿಣಾಮವಾಗಿ ಕೂಡಲೇ ಎಲ್ಲ ಸಂಘಗಳಿಗೂ ಹಾಲಿನ ಜಿಡ್ಡು ಪರೀಕ್ಷೆಗೆ ಬೇಕಾದ ಆಲ್ಕೋಹಾಲ್ ಸರಬರಾಜಾದುದಲ್ಲದೆ, ಇಲ್ಲಿಂದ ಕಳಿಸಿದ ಹಾಲಿಗೆ 4.2-4.3ರಷ್ಟು ಜಿಡ್ಡಿನ ಅಂಶ ದಾಖಲಾಗತೊಡಗಿತು (3.8ಕ್ಕಿಂತ ಹೆಚ್ಚು ಬಾರದಿದ್ದುದು). ಜೊತೆಗೆ ಜನವರಿ ತಿಂಗಳ ಮತ್ತೂ ಒಂದು ಬಿಲ್ ಬಂದುದಲ್ಲದೆ, ಉಳಿದ ಹಣವನ್ನು ಶೀಘ್ರವೇ ಕಳಿಸುವ ಭರವಸೆ ಹಾಗೂ ಒಂದು ಲೋಡು ಫೀಡ್ಸ್ ಕಳಿಸುವ ಆಶ್ವಾಸನೆಯೂ ಸಿಕ್ಕಿತ್ತು. ಆದರೆ ಯಾವುದೂ ಬರಲಿಲ್ಲ.

ರೈತರ ಹಣದಿಂದಲೇ ಕೊಬ್ಬಿ, ರೈತರ ಹಿತವನ್ನೇ ತುಚ್ಛವಾಗಿ ಕಾಣುತ್ತಿರುವ ಡೈರಿ ಸಿಬ್ಬಂದಿಯ ವಿರುದ್ಧ ಪ್ರತಿಭಟನೆಗೆ ಹಾಲು ಉತ್ಪಾದಕರು ಸಿದ್ಧರಾಗುತ್ತಿದ್ದಾರೆ.


ಸಂಪಾದಕ, ಮುದ್ರಕ ಮತ್ತು ಪ್ರಕಾಶಕ:
ಸಿರಿಮನೆ ನಾಗರಾಜ್
ಅಚ್ಚು: ದೀವಟಿಗೆ ಅಚ್ಚುಕೂಟ, ಕೊಪ್ಪ.


## 1.50 ಲಕ್ಷ ರೂ. ಶ್ರೀಗಂ... ವಶ; ನಾಲ್ವರ ಬಂಧನ

ನರಸಿಂಹರಾಜಪುರ: ಇಲ್ಲಿಗೆ ಸಮೀ... ಗುಳ್ಳದಮನೆ ಗ್ರಾಮದ ಕಾಡಿನಲ್ಲಿ ಮು... ಡಲಾಗಿದ್ದ ಒಂದೂವರೆ ಲಕ್ಷ ರೂಪಾ... ಬೆಲೆಬಾಳುವ ಅಕ್ರಮ ಶ್ರೀಗಂಧವ... ವಲಯ ಅರಣ್ಯಾಧಿಕಾರಿ ಧರ್ಮಪಾಲ್ ... ಪಡಿಸಿಕೊಂಡು ನಾಲ್ವರು ಕಳ್ಳಸಾ... ದಾರರನ್ನು ಬಂಧಿಸಿದ್ದಾರೆ.

1,110 ಕಿಲೋ ಅಕ್ರಮ ದಾಸ್ತಾ... ನಲ್ಲಿ ತೊಡಗಿದ್ದ ಅಂತೋಣಿ, ಜೋಸೆ... ಜೋಯ್ ಹಾಗೂ ಅಶೋಕ್ ಸೆರೆ ಸಿಕ್ಕಿ... ಉಳಿದ 6 ಜನ ಆರೋಪಿಗಳು ಪರಾರಿ... ದರೆನ್ನಲಾಗಿದೆ.

ಕಳ್ಳರನ್ನು ಹಿಡಿಯುವಲ್ಲಿ ಅರಣ್ಯ ಪ... ಕ ವೆಂಕಟರಮಣ, ಸಿಬ್ಬಂದಿಗಳಾದ ಚಂ... ಶೇಖರ್, ವೆಂಕಟೇಶ್, ಯಲ್ಲೋಜಿ, ... ಮಾನಾಯಕ್ ಶ್ರಮಿಸಿದ್ದರು.

## ಕಾಫಿ: ನ. ರಾ. ಪುರದಲ್ಲಿ ಲೈಸನ್ ಕಛೇರಿ

ನ. ರಾ. ಪುರ: ಇಲ್ಲಿ ಕಾಫಿ ಮಂ... ವಿಸ್ತರಣಾ ವಿಭಾಗದ ಕಿರಿಯ ಸಂಪರ್ಕಾ... ಕಾರಿಗಳ ಕಛೇರಿ ಮಾ. 1ರಿಂದ ಪ್ರಾರಂ... ವಾಗಿದೆ.

ಈ ಕಛೇರಿಯ ಅಧಿಕಾರ ವ್ಯಾ... ಒಳಪಟ್ಟ ನರಸಿಂಹರಾಜಪುರ ಸುತ್ತಮು... ಲಿನ ಕಾಫಿ ಬೆಳೆಗಾರರು ಕಾಫಿ ಮಂ... ಯಿಂದ ದೊರಕಲಿರುವ ತಾಂತ್ರಿಕ ಸ... ವಿವಿಧ ಸಾಲ ಸೌಲಭ್ಯಗಳು, ಹೊಸ ತ... ಟಕ್ಕೆ ಸಹಾಯಧನ ಮೊದಲಾದ ಸೌಲ... ವನ್ನು ಉಪಯೋಗಿಸಿಕೊಳ್ಳಬೇಕೆ... ಮಂಡಳಿ ಅಧಿಕಾರಿಗಳು ಕೋರಿದ್ದಾರೆ.

# ಚಂದ್ರಗುತ್ತಿಯ 'ಬೆತ್ತಲೆ' ಜಾತ್ರೆ ನಿಷೇಧ ಕುರಿತು....

**ಮಾರ್ಚ್ 20, 1986. ಶಿವಮೊಗ್ಗ ಜಿಲ್ಲೆ ಸೊರಬ ತಾಲ್ಲೂಕಿನ ಕುಗ್ರಾಮ ಚಂದ್ರಗುತ್ತಿಯ ಇತಿಹಾಸದಲ್ಲೊಂದು ಕ್ರೂರ, ಕರಾಳ ದಿನ. ಚಂದ್ರಗುತ್ತಿಯೇಕೆ— ಇಡೀ ದೇಶದ ನಾಗರಿಕತೆಯ ಇತಿಹಾಸದಲ್ಲೇ ಇಂಥ 'ನಗ್ನ ಕಾಂಡ' ನಡೆದ ದಾಖಲೆಯಿಲ್ಲ ವಿಶ್ವದ ನಾಗರಿಕತೆಯೆದುರು ದೇಶದ ಪ್ರಜ್ಞಾವಂತ ಸಮುದಾಯ ಅವಮಾನದ ಭಾರದಿಂದ ತಲೆ ತಗ್ಗಿಸಿತು.... ಕೇವಲ ನಿನ್ನೆ-ಮೊನ್ನೆಯೆಂದಂತಿದೆ ಇದೆಲ್ಲ.**

**ಈ ದಾಂಧಲೆಗಳ ಬಗ್ಗೆ ನ್ಯಾಯಾಂಗ ವಿಚಾರಣೆ ನಡೆದು, ಅದರ ವರದಿಯನ್ನು ಸರ್ಕಾರ ಅಂಗೀಕರಿಸಿ, ಕಡೆಗೂ 'ಬೆತ್ತಲೆ ಸೇವೆ' ಎಂಬುದನ್ನೇ ರಾಜ್ಯಾದ್ಯಂತ ನಿಷೇಧಿಸಿದ್ದಲ್ಲದೆ, ಚಂದ್ರಗುತ್ತಿಯಲ್ಲಿ ಈ ವರ್ಷದ ಜಾತ್ರೆಯನ್ನೂ ನಿಷೇಧಿಸಿತು. 2000 ಜನರ ಪೋಲೀಸ್ ಪಡೆ ಅದನ್ನು ಯಶಸ್ವಿಯಾಗಿ ಕಾರ್ಯಗತಗೊಳಿಸಿಯೂ ಆಗಿದೆ.**

**'ಚಂದ್ರಗುತ್ತಿ'ಯಾಗಿ ಕೇವಲ 20 ದಿನದೊಳಗೆ ಬಳ್ಳಾರಿಯಲ್ಲಿ ಅದಕ್ಕಿಂತಲೂ 'ವರ್ಣಮಯ'ವಾದ ಅಂಥದೇ ಇನ್ನೊಂದು 'ಧಾರ್ಮಿಕ ಸಂಪ್ರದಾಯ'ವನ್ನು ಒಬ್ಬ ದಿಟ್ಟ ದಲಿತ ಪೋಲಿಸ್ ಅಧಿಕಾರಿ ನಿರ್ದಾಕ್ಷಿಣ್ಯವಾಗಿ ಕಿತ್ತುಹಾಕಿದರು....**

ಯಾವ ವಿಧದಲ್ಲಿ ತಿಳಿ ಹೇಳಿದರೂ ಮನ ಸಲಾಗದೆ ಹೋದ ಶಿವಮೊಗ್ಗ ಜಿಲ್ಲೆಯ ದ್ರಗುತ್ತಿ ಬೆತ್ತಲೆಸೇವೆಯ ಧೂರ್ತ ಬೋ ಪ್ರಚೋದಕರನ್ನು ತೀವ್ರಮಟ್ಟದ ಬಲ ರೋಗದಿಂದಲೇ ಈ ಬಾರಿ ಮಣಿಸಿದ್ದಾಗಿ ಕಡೆಗಾದರೂ ಈ ನಿರ್ಧಾರ ತೆಗೆದುಕೊಂ ಸರ್ಕಾರಕ್ಕೂ ಹಾಗೂ ಮನಸ್ಸಿನಲ್ಲಿ ೀ ವಿಷವನ್ನು ತುಂಬಿಕೊಂಡಾದರೂ ಸರಿ ನ್ನು ಯಶಸ್ವಿಯಾಗಿ ಕಾರ್ಯಗತಗೊಳಿ . ಪೋಲೀಸ್ ವರಿಷ್ಠರಿಗೂ ಅಭಿನಂದ ಜೊತೆಗೆ, 'ಉಗುರಿನಲ್ಲಿ ಆಗಬಹು ಮುದಕ್ಕೆ ಕೊಡಲಿ ತರುವಂಥ ಪರಿಸ್ಥಿತಿ ಸಿದ್ದಕ್ಕೆ ಛೀಮಾರಿಯನ್ನೂ ಸಹ ಜನ ಕಬೇಕಾಗಿದೆ.

### ಶಾಸ್ತ್ರಸಮ್ಮತವಲ್ಲ

'ಬೆತ್ತಲೆ ಸೇವೆ ಯಾವ ರೀತಿಯಲ್ಲೂ ತ್ರ ಸಮ್ಮತವಲ್ಲ. ಅದೊಂದು ನಮ್ಮ ಾಜಕ್ಕೇ ಅಪಮಾನಕರವಾದ ಆಚರಣೆ. ರೋ ಸ್ವಾರ್ಥಿಗಳು ಬಡ ಜನರ ಮು ದೈವಭಕ್ತಿಯನ್ನು ದುರುಪಯೋಗ ಸಿಕೊಂಡು ತಮ್ಮ ವಿಕೃತ ಮನಸ್ಸಿನ ಲವನ್ನು ತೀರಿಸಿಕೊಳ್ಳಲು ಹಾಗೂ ಭದಲ್ಲಿ ತಮ್ಮ ಹೊಟ್ಟೆ ತುಂಬಿಸಿ ಳ್ಳಲು ಹುಟ್ಟು ಹಾಕಿದ ಒಂದು ಹೀನ ತಿ ಅದು. ಅದನ್ನು ತ್ಯಜಿಸಿ, ಬೇರೆ ಸದಲ್ಲಿ ನಿಮ್ಮ ಸೇವೆ, ಹರಕೆ ತೀರಿಸಿ...." —ಹೀಗೆಂದು ಕಳೆದೆರಡು ವರ್ಷಗಳಲ್ಲಿ, ಮುಖ್ಯವಾಗಿ ಕಳೆದ ವರ್ಷ—ನೂರಾರು ಜನ ಯುವಕ-ಯುವತಿಯರು ಬಡ ಭಕ್ತ ಜನತೆಗೆ ವಿಧ ವಿಧವಾಗಿ ಮನಮುಟ್ಟುವಂತೆ ಹೇಳಿದರು. ಪಾಪ, ದೈವಭೀತಿ ಉತ್ಕಟವಾಗಿ ಇದ್ದಾಗ್ಯೂ ಬಹುತೇಕ ಬಡ ಜನ ಇದನ್ನು ಒಪ್ಪಿ ನಡೆಯಲು ಸಿದ್ಧರಾಗುತ್ತಾರೆ ಎಂಬ ಸುಳಿವು ಹತ್ತಿದ, ಬೆತ್ತಲೆ ಸೇವೆಯ ಬೋಧಕ - ಪ್ರಚೋದಕರಾದ ಧೂರ್ತರು ತಮ್ಮ ದರಿದ್ರ ಹೊಟ್ಟೆಪಾಡಿನ (ಹಾಗೂ ಚಾಪಲ್ಯ ತೀರಿಕೆಯ) ಈ ಸುಲಭ ಮಾರ್ಗ ತಮ್ಮ ಕೈತಪ್ಪಿಹೋಗುವುದನ್ನು ಬಯಸದೆ, ಕೇವಲ ಅಷ್ಟಕ್ಕಾಗಿ ಸಾವಿರಾರು ಜನರನ್ನು ಇನ್ನಿಲ್ಲದ ಹಿಂಸೆಗೆ (ಮಾನಸಿಕ ಮತ್ತು ದೈಹಿಕ) ಗುರಿಪಡಿಸಿ ಧಾಂಧಲೆ ಎಬ್ಬಿಸಿದರು. ಇಡೀ ದೇಶವೇ ನಾಗರಿಕತೆಯೆದುರು ಅವಮಾನದಿಂದ ತಲೆ ತಗ್ಗಿಸಿತು. ಈ ಘಟನೆಗಳೆಲ್ಲ ನಡೆದು ಒಂದು ವರ್ಷವೇ ಉರುಳಿ ಹೋದರೂ ಇನ್ನೂ ನಿನ್ನೆ-ಮೊನ್ನೆ ನಡೆದಂತಿದೆ.

### ನಗ್ನಾವತಾರಕ್ಕೆ ನಿಷೇಧ

1986ರ ಮಾರ್ಚ್ 20ರಂದು ಚಂದ್ರಗುತ್ತಿಯಲ್ಲಿ ಬೆತ್ತಲೆ ಪ್ರಿಯರು ನಡೆಸಿದ ಈ ಭಯಾನಕ ನಗ್ನಾವತಾರದ ಬಗ್ಗೆ 'ವಿಚಾರಣೆ' ನಡೆಸಿದ ಚನ್ನವೀರಪ್ಪ ಆಯೋಗ ಬೆತ್ತಲೆ ಸೇವೆ ವಿರುದ್ಧ ವ್ಯಾಪಕ ಪ್ರಚಾರ ಮತ್ತು ಶಿಕ್ಷಣ ಕೊಡುವುದರ ಜೊತೆಗೆ ಈ ಇಡೀ ಜಾತ್ರೆಯನ್ನೇ ಕೆಲವು ವರ್ಷ ಕಡ್ಡಾಯವಾಗಿ ನಿರ್ಬಂಧಿಸಬೇಕೆಂದು ಶಿಫಾರ್ಸು ಮಾಡಿದ್ದನ್ನನುಸರಿಸಿ ರಾಜ್ಯ ಸರ್ಕಾರವು ರಾಜ್ಯಾದ್ಯಂತ ಬೆತ್ತಲೆ ಸೇವೆಯನ್ನು ನಿಷೇಧಿಸಿದ್ದಲ್ಲದೆ, ಚಂದ್ರಗುತ್ತಿಯಲ್ಲಿ ಈ ವರ್ಷದ ಜಾತ್ರೆಯನ್ನೇ ರದ್ದುಪಡಿಸಿ ಆಜ್ಞೆ ಹೊರಡಿಸಿತು. ಚಂದ್ರಗುತ್ತಿಯಂಥ ಕುಗ್ರಾಮದಲ್ಲಿ ಸುಮಾರು 2000 ಜನ ಪೋಲೀಸರು ಮತ್ತು ಗೃಹರಕ್ಷಕ ದಳದವರು ಬೀಡು ಬಿಟ್ಟು, ಅತಿ ಬಿಗಿಯಾದ ಪಹರೆ ಏರ್ಪಡಿಸಿ, ಜಾತ್ರೆ ಹಾಗೂ ಬೆತ್ತಲೆ ಸೇವೆ ನಡೆಯದಂತೆ ಯಶಸ್ವಿಯಾಗಿ ತಡೆದರು.

### ಬೇಜವಾಬ್ದಾರಿತನ

ವಾಸ್ತವವಾಗಿ, ಕಳೆದ ವರ್ಷವೇ ಸರ್ಕಾರ ಈ ದಿಟ್ಟ ನಿಲುವು ತೆಗೆದುಕೊಂಡಿದ್ದರೆ— ಅಷ್ಟೇಕೆ, ಶಿವಮೊಗ್ಗ ಎಸ್‌ಪಿ ವೈ. ಆರ್. ಪಾಟೀಲ್ ಮತ್ತು ಜಿಲ್ಲಾಧಿಕಾರಿ ತಂಗರಾಜ್ ಅವರುಗಳು ಕನಿಷ್ಠ ತಾವು ತಿನ್ನುವ ಸಂಬಳಕ್ಕೆ ತಕ್ಕಷ್ಟಾದರೂ ಜವಾಬ್ದಾರಿ ತೋರಿಸಿದ್ದರೂ ಸಾಕಿತ್ತು. ಈ ಯಾವ ಘಟನಾವಳಿಗಳೂ ಬಹುಶಃ ನಡೆಯುತ್ತಿರಲಿಲ್ಲ. 1985ರಲ್ಲೇ ಬೆತ್ತಲೆ ಸೇವೆ ವಿರುದ್ಧ ತಕ್ಕ ಮಟ್ಟಿಗೆ ಹಳ್ಳಿಗಳಲ್ಲಿ ಪ್ರಚಾರ ನಡೆಸಿ, ಕಳೆದ ವರ್ಷ 1 ತಿಂಗಳಿಂದಲೂ ಆ ಪ್ರದೇಶದಾದ್ಯಂತ ವ್ಯಾಪಕ ಪ್ರಚಾರ ನಡೆಸಿದ ದಲಿತ ಸಂಘರ್ಷ ಸಮಿತಿ ಹಾಗೂ ರಾಜ್ಯದ ಬಹುತೇಕ ಪ್ರಗತಿಪರ ವೇದಿಕೆಗಳು, ಪತ್ರಿಕೆಗಳು, ಸಾಮಾಜಿಕ ಕಾರ್ಯಕರ್ತರು— ಎಲ್ಲರೂ ಬೆತ್ತಲೆಸೇವೆ ನಿಷೇಧಿಸುವಂತೆ ಸರ್ಕಾರವನ್ನು ಒತ್ತಾಯಿಸಿದ್ದಲ್ಲದೆ ಬಿಗಿ ಪೋಲೀಸ್ ಬಂದೊಬಸ್ತು ಮತ್ತು ಸಾಮಾಜಿಕ ಕಾರ್ಯಕರ್ತರಿಗೆ ಪರಿಣಾಮಕಾರಿ ರಕ್ಷಣೆ ಏರ್ಪಡಿಸುವಂತೆ ಮೇಲ್ಕಂಡ ಅಧಿಕಾರಿಗಳಿಗೂ ಮನವಿ ಸಲ್ಲಿಸಿ ಒತ್ತಾಯಿಸಿದ್ದರು.

### "ಅಕ್ಷಮ್ಯ"

ಆದರೆ ಏನು ಮುಂಜಾಗ್ರತಾ ಕ್ರಮ ತೆಗೆದುಕೊಳ್ಳಲಾಗಿದೆ ಎಂಬುದನ್ನು ತಿಳಿದುಕೊಳ್ಳುವ ಗೋಡವೆಗೇ ಹೋಗದ, ಜಿಲ್ಲಾ ದಂಡಾಧಿಕಾರಿಯೂ ಆದ ಡಿಸಿ ಒಂದು ಕಡೆಯಾದರೆ, ಎಸ್ಪಿ ಅಂಥ ಪ್ರಕ್ಷುಬ್ಧ ಪರಿಸ್ಥಿತಿಯಲ್ಲಿ ಸ್ಥಳಕ್ಕೆ ಕೂಡ ಹೋಗದೆ ಮದುವೆ ಮನೆ, ಮೀಟಿಂಗ್ ಅಂತ ಸುತ್ತಾಡಿಕೊಂಡಿದ್ದರು ! ಚನ್ನವೀರಪ್ಪ ಆಯೋಗ ಈ ಇಬ್ಬರ ಕರ್ತವ್ಯ ಲೋಪವನ್ನೂ ಬಹಳ ಅಕ್ಷಮ್ಯವೆಂದೇ ಪರಿಗಣಿಸಿದೆ

### ಅಧಿಕಾರಿಗಳೂ ಮನಸ್ಸು ಮಾಡಿದ್ದರೆ....

ಮಹಿಳೆಯರೂ ಪುರುಷರೂ ಸೇರಿದಂತೆ ನೂರಾರು ಜನ ಗಟ್ಟಿ ಮನಸ್ಸಿನ ಸಮಾಜ ಸೇವಾ ಕಾರ್ಯಕರ್ತರು ಭಕ್ತರ ಮನ ಒಲಿಸಿ ಬೆತ್ತಲೆ ಸೇವೆಯನ್ನು ಒಂದು ದಿನ ಯಶಸ್ವಿಯಾಗಿ ತಡೆದು ಎರಡನೇ ದಿನವೂ ಬೆಳಗಿನ 10 ಗಂಟೆಯವರೆಗೂ ತಡೆದಿದ್ದರು. ಇವರ

(3ನೇ ಪುಟಕ್ಕೆ)

---

ದ್ಯ ದಂಕಣ

## ಮರದ ಮೊರೆ

ಒಂದು ವೃಕ್ಷ ಅಡಲಾರೆನು ಮಾತು
ರುವೆ ಸೋತು,
ವೆನು ಈ ಜನ್ಮ ಬೇಡವೆನಗೆ.
ಂಟೆ ಕಾಲಿಹುದೆನಗೆ ನಡೆಯಲಾರೆನು
ಂತು ದಣಿದಿಹೆನು ಮಲಗಲಾರೆನು
ನವು ನಿಮ್ಮಂತೆ,
ಹೇಳಿ ನಾ ಇರಲಿ ಹೇಗೆ?
ಯುವರು ಈ ಜನರು ನನ್ನ ತಲೆ,
ಾಲ್ಗಳ, ಸಹಿಸಲಾರೆನು ನೋವ
ಹೇಳಿ ನಾ ಬದುಕುವುದು ಹೇಗೆ?
ಲಗುವಿರಿ ನನ್ನ ಬುಡದಲ್ಲೆ
ಣಿಯುವಿರಿ ನನ್ನ ನೆರಳಲ್ಲೆ, ಸುಡುವಿರಿ
ಸತ್ತ ದೇಹವನು ನನ್ನ ಸೌದೆಯಲೆ,
ದಯೆಯು ಎಲ್ಲಿಹುದು ನಿಮಗೆ?
ೊಡುವೆ ನಿಮಗೆ ಹಣ್ಣು, ಕಾಯಿಗಳ
ನಲು ಪುರಳೆಗಳ, ನಾಪು ಬೇರುಗಳ
ಸ್ವಾರ್ಥವೆಲ್ಲಿಹುದು ಎನಗೆ?
ಳುವಿರಿ ನನ್ನ ಹೊಟ್ಟೆ ಕೈ ಕಾಲುಗಳ
ಟ್ಟುವಿರಿ ಮಹಡಿ ಮನೆಗಳ
ಕರುಣೆ ಎಲ್ಲಿಹುದು ನಿಮಗೆ?
ೈಯ್ಯುವಿರಿ ನನ್ನ ಬಂಧು
ಿವರ ನಾಶ ಮಾಡುವಿರಿ ನಮ್ಮ
. ವಿನಾಶದಂಚಿಗೆ
ಬಂದಿಹಿರಿ ಗೊತ್ತೆ ನಿಮಗೆ?
ನೆಟ್ಟು ಬೆಳೆಸಿದಿರೇನು ನನ್ನ
ನೀರಿಟ್ಟು ಪೋಷಿಸಿದಿರೇನು
ಕೊಟ್ಟವರಾರು ನಿಮಗೆ ನಮ್ಮ
ತರಿಯುವಧಿಕಾರ ಹೇಳಿ ನನಗೆ!

—ಎಸ್.ಎಸ್. ಸೀತಾರಾಂ
ಸತ್ತಿಕಲ್ಲು.

## ಇಂದೇತಕೆ ಹೀಗೆ ?

ಅದೇ ಹುಡುಗಿ ಅಲ್ಲವೇನು
ಹಾದು ಹೋದ ಚಂದ್ರಮುಖಿ?
ಮುಖದ ತುಂಬ ನಗೆಯ ಚೆಲ್ಲಿ
ನಾಚಿ ನಡೆದ ಇಂದುಮುಖಿ.
ತುಂಡು ಹಸಿರು ಚುಕ್ಕೆ ಲಂಗ
ತಿಳಿನೀಲಿಯ ಕುಪ್ಪಸ
ಮರ ಹತ್ತುವ ಮಂಗನಾಟ
ಕುಂಟೊಬಿಲ್ಲೆ ಉಬ್ಬಸ.
ಚಪ್ಪರದಿ ಚಪ್ಪೆಗಾಲು
ತೊಡೆತಟ್ಟಿದ ಸಂಗೀತ
ಹಿತ್ತಲಲ್ಲು ಕುಕ್ಕ(ರ)ಗಾಲು
ನಕ್ಕಿದ್ದೆಲ್ಲ ಗೀತ.
ಆಟವೆಲ್ಲ ಒಂದೇ ಅಂತೆ ಓಟಕೆಂತ ವೇಗ?
ನೋಟವೆಲ್ಲ ಒಂದೇ ಆಗೆ ಕೂಟಕೆಂತ ಬೇಗ?
ಹಾಗೇ ಇತ್ತು ಅದೇ ನೆನ್ನೆ ಅದೇ ಮೊನ್ನೆ
ಇಂದೇತಕೆ ಹೀಗೆ ?
ಹದಿನಾರರ ಕಾರುಬಾರು
ಕಾಲ ತಂದ ಬೇಗೆ.

—ಎಚ್. ವಿ. ಶ್ರೀವತ್ಸ.

---


## ಮುಂಜಾವು' ಪತ್ರಿಕೆಯ ಮಾಲೀಕತ್ವ ಮತ್ತಿತರ ವಿವರ

ಫಾರಂ ನಂ. IV (ರೂಲ್ 8 ನೋಡಿ)

| | |
|---|---|
| 1. ಪ್ರಕಟಣೆಯ ಸ್ಥಳ | ಕೊಪ್ಪ, ಚಿಕ್ಕಮಗಳೂರು ಜಿಲ್ಲೆ. |
| 2 ಪ್ರಕಟಣೆಯ ಅವಧಿ | ವಾರಕ್ಕೊಮ್ಮೆ |
| 3. ಭಾಷೆ | ಕನ್ನಡ |
| 4. ಸಂಪಾದಕ, ಮುದ್ರಕ ಮತ್ತು ಪ್ರಕಾಶಕರ ಹೆಸರು, ರಾಷ್ಟ್ರ, ವಿಳಾಸ | ಸಿರಿಮನೆ ನಾಗರಾಜ್ ಭಾರತೀಯ 129/1, ವೀರಭದ್ರಸ್ವಾಮಿ ರಸ್ತೆ, ಕೊಪ್ಪ, ಚಿಕ್ಕಮಗಳೂರು ಜಿಲ್ಲೆ, ಕರ್ನಾಟಕ |
| 5. ಪತ್ರಿಕೆಯ ಮಾಲೀಕತ್ವ ಅಥವಾ ಪಾಲುದಾರಿಕೆ | ಪೂರ್ಣ ಮಾಲೀಕತ್ವ: ಸಿರಿಮನೆ ನಾಗರಾಜ್. |

ಮೇಲೆ ಕಾಣಿಸಿರುವ ವಿವರಗಳು ನನ್ನ ಗ್ರಹಿಕೆ ಮತ್ತು ವಿಶ್ವಾಸದ ಪ್ರಕಾರ ಸರಿಯಾಗಿವೆಯೆಂದು ಈ ಮೂಲಕ ಹೇಳುತ್ತಿದ್ದೇನೆ. ಸಿರಿಮನೆ ನಾಗರಾಜ್

15-3-1987. (ಪ್ರಕಾಶಕರ ಸಹಿ)

# ಚಂದ್ರಗುತ್ತಿಯ 'ಬೆತ್ತಲೆ' ಜಾತ್ರೆ ನಿಷೇಧ ಕುರಿತು....

(2ನೇ ಪುಟದಿಂದ)

ಪ್ರಯತ್ನಕ್ಕೆ ಪೂರಕವಾಗುವಂತೆ ಈ ಮೇಲ್ಕಂಡ ಅಧಿಕಾರಿಗಳೂ ಪೂರ್ಣ ಮನಸ್ಸಿನಿಂದ ಶ್ರಮಿಸಿದ್ದರೆ ಸಾಕಿತ್ತು–ನರಸತ್ತ ಸರ್ಕಾರಗಳ ಮತ್ತು ರಾಜಕಾರಣಿಗಳ ಹಂಗೇ ಬೇಡವಾಗಿತ್ತು–ಈ ವರ್ಷ ಕಂಡಂಥ ಈ ಯಾವ ಉಸಿರು ಕಟ್ಟಿನ ಬಲ ಪ್ರಯೋಗವೂ ಇಲ್ಲದೆಯೇ, ಕಳೆದ ವರ್ಷ ಇದೇ ಜಾತ್ರೆಯ ನಡುವೆಯೇ ಬೆತ್ತಲೆ ಸೇವೆ ಬಹುಶಃ ನಿಷೇಧಗೊಳ್ಳುತ್ತಿತ್ತು. ಅದಕ್ಕೇ ಹೇಳಿದ್ದು –'ಉಗುರಿನಲ್ಲಿ ಆಗುವುದಕ್ಕೆ ಕೊಡಲಿ ತಂದಂತೆ' ಎಂದು.

ಈ ಮಾತನ್ನು ಸಮರ್ಥಿಸಲು, ಕಳೆದ ವರ್ಷ ಈ ಘೋರ ನಗ್ನ ಕಾಂಡ ನಡೆದ ಕೆಲವೇ ದಿನಗಳಲ್ಲಿ ಇದಕ್ಕಿಂತಲೂ ವಿಕೃತ 'ರೋಮಾಂಚಕ'ವಾದ ಇನ್ನೊಂದು ಸೇವೆಯನ್ನು ಒಬ್ಬ ದಿಟ್ಟ ಪೋಲೀಸ್ ಅಧಿಕಾರಿ ಯಶಸ್ವಿಯಾಗಿ ತಡೆಗಟ್ಟಿದ ಪ್ರಕರಣವನ್ನು ಇಲ್ಲಿ ಉಲ್ಲೇಖಿಸುತ್ತೇನೆ. ಇದು 'ಸುದ್ದಿ ಸಂಗಾತಿ' ವಾರ ಪತ್ರಿಕೆಯ ಹೊರತು ಮತ್ತೆಲ್ಲೂ ಅಷ್ಟಾಗಿ ಬೆಳಕು ಕಾಣಲಿಲ್ಲ

**'ಓಕುಳಿ'**

ಬಳ್ಳಾರಿ ಜಿಲ್ಲೆಯ ಮುದ್ದಟನೂರು ಮತ್ತು ಕಲ್ಲುಂಬ ಎಂಬ ಎರಡು ಊರುಗಳಲ್ಲಿ ಯುಗಾದಿಯ ಮರುದಿನ 'ಓಕುಳಿ' ಎಂಬ ಸಂಪ್ರದಾಯವೊಂದು ನಡೆಯುತ್ತಿತ್ತು. ಇದೊಂದು ಹೆಚ್ಚು ಕಡಿಮೆ ಬಹಿರಂಗ ಕಾಮಕೇಳಿಯಿದ್ದಂತೆ. ಸವರ್ಣೀಯ ಗಂಡುಗಳು ಹದಿಹರಯದ ದಲಿತ ಹೆಣ್ಣುಗಳ ಮತ್ತು ದೇವದಾಸಿಯರ ಜೊತೆ ಪವಿತ್ರ ದೇವಾಲಯದ ಮುಂದೆ ಸಾವಿರಾರು ಜನರ ಎದುರು ನಡೆಸುವಂಥದು. (ಗಂಡುಗಳು ಸವರ್ಣೀಯರು ಮಾತ್ರ. ಹಾಗೇ ಹೆಣ್ಣುಗಳು ದೇವದಾಸಿಯರೇ ಮತ್ತು ದಲಿತರೇ ಆಗಬೇಕು !)

ದೇವಾಲಯದ ಮುಂಭಾಗದಲ್ಲಿ ಒಂದು ದೊಡ್ಡ ಹೊಂಡ. ಅದರ ತುಂಬ ಬಣ್ಣದ ನೀರು. ಓಕುಳಿಗೆ ಬರುವ ಹೆಣ್ಣುಗಳು, ಓಕುಳಿಯ 'ಹರಕೆ' ಹೊತ್ತ ಸವರ್ಣೀಯ ಗಂಡುಗಳು ಕೊಡುವ ಸೀರೆ–ರವಿಕೆ ತೊಟ್ಟು ಓಕುಳಿಗೆ ಸಿದ್ಧಳಾಗಬೇಕು. ತನ್ನ ಮೇಲೆ ಬಣ್ಣದ ನೀರನ್ನು ಎರಚುತ್ತ **ತನ್ನನ್ನು ಹಿಡಿದು ಅಪ್ಪಿಕೊಳ್ಳಲು ಬರುವ ಗಂಡಿಗೆ** ಕೈಯಲ್ಲಿ ಹಿಡಿದ ಹೊಸ ಪೊರಕೆಯಿಂದ 'ಬರ್ಲು ಸೇವೆ' ಮಾಡಬೇಕು. ಇದೇ 'ಓಕುಳಿ' ಎಂಬ ಸೇವೆ !

**ಬಹಿರಂಗ ಕಾಮಕೇಳಿ!**

ಈ ಓಕುಳಿಯಾಟ ನೋಡಲು ಸುತ್ತಮುತ್ತಲ ಗ್ರಾಮಗಳಿಂದ ಸಹಸ್ರಾರು ಪಡ್ಡೆ ಹುಡುಗರು ಮತ್ತು ರಸಿಕ ಮುದುಕರ ಹಿಂಡೇ ಸೇರುತ್ತದೆ. ಈ ಗ್ರಾಮಗಳ ಕೆಲವು ಹುಡುಗರು ಹೇಳುವಂತೆ, ಸಂಜೆ ನಾಲ್ಕರಿಂದ ಏಳರವರೆಗೆ ನಡೆಯುವ ಈ ಓಕುಳಿಯಾಟಕ್ಕೆ ಸವರ್ಣೀಯ ಗಂಡಸರು ಕುಡಿದು ಮತ್ತರಾಗಿ ಬಂದಿರುತ್ತಾರೆ. ಸಂಭೋಗ ಕ್ರಿಯೆ ಒಂದನ್ನುಳಿದು ಮತ್ತೆಲ್ಲ ಬಗೆಯ ಕಾಮಕೇಳಿ ಬಹಿರಂಗವಾಗಿ ನಡೆಯುತ್ತದೆ.

**ಶೋಷಣೆ ತಡೆಗೆ ಮನವಿ: ಅಧಿಕಾರಿಯ ಗಟ್ಟಿ ಮನಸ್ಸು**

ಹದಿಹರಯದ ದಲಿತ ಹೆಣ್ಣುಗಳ ಈ ಹೀನ ಶೋಷಣೆಯ ಬಗ್ಗೆ ದಲಿತ ಸಂಘರ್ಷ ಸಮಿತಿ ಮತ್ತು ಅನೇಕ ಪ್ರಗತಿ ಪರ ಯುವಕರು ಅಲ್ಲಿನ ಎಸ್ಪಿ ಸುಭಾಷ್ ಭರಣಿಯವರ ಗಮನ ಸೆಳೆದು ಇದನ್ನು ನಿಲ್ಲಿಸಲು ಕೋರಿದರು.

ಹಲವಾರು ವರ್ಷಗಳಿಂದ ನಡೆದು ಬಂದಿದ್ದ ಈ ಬಿಟ್ಟಿ ಕಾಮಕೇಳಿಯ ತಡೆಗೆ ಹಲವಾರು ಪಟ್ಟಭದ್ರ ಹಿತಾಸಕ್ತಿಗಳಿಂದ ಅನೇಕ ಅಡೆತಡೆಗಳು ಬಂದವು ಸಾಲದುದಕ್ಕೆ ಮಾ. 20ರ ಚಂದ್ರಗುತ್ತಿ ಕ್ರೌರ್ಯಕಾಂಡ ಆಗಷ್ಟೇ ನಡೆದಿತ್ತು. ಆದರೂ ಸುಭಾಷ್ ಭರಣಿ ಗಟ್ಟಿ ಮನಸ್ಸು ಮಾಡಿದರು.

ಏಪ್ರಿಲ್ 10ರಂದು ಯುಗಾದಿ. ಅದಕ್ಕಿಂತ ಸುಮಾರು 2 ವಾರಗಳ ಮೊದಲೇ ಈ ಬಗ್ಗೆ ಸ್ಥಳೀಯ ಸಾಮಾಜಿಕ ಕಾರ್ಯಕರ್ತರು, ಸಮಾಜಕಲ್ಯಾಣ ಇಲಾಖೆಯ ಅಧಿಕಾರಿಗಳು ಮತ್ತು ತಮ್ಮ ಪೋಲೀಸ್ ಯೊಡನೆ ಚರ್ಚಿಸಿ, ಜನರ ಮನವೊಲಿಸಲು ಕರಪತ್ರ, ಬೀದಿ ಭಾಷಣ, ಭಿತ್ತಿಪತ್ರ ಪ್ರದರ್ಶನ ನಡೆಸಿದರು.

ಈ ಬಗ್ಗೆ ಜಿಲ್ಲಾಧಿಕಾರಿ ಸುಧೀಂದ್ರ ಕುಮಾರ್ ಜತೆ ಕೂಡಾ ಚರ್ಚಿಸಿ, 35ನೇ ಪೋಲೀಸ್ ಕಾಯಿದೆ ಪ್ರಕಾರ ಆ ಎರಡು ಗ್ರಾಮಗಳಲ್ಲಿ ನಿಷೇಧಾಜ್ಞೆ ಜಾರಿಗೊಳಿಸಿದರು.

**ರಾಜಕೀಯ ಒತ್ತಡ**

ಆದರೆ ಸಂಪ್ರದಾಯದ ಹೆಸರಿನಲ್ಲಿ ಸಿಗುವ ಈ ಪುಕ್ಕಟೆ ಕಾಮಕೇಳಿಯ ಓಕುಳಿಯಾಟ ನಿಲ್ಲಿಸದಂತೆ ರಾಜಕೀಯ ಒತ್ತಡ ತರಲು ಊರಿನ ಸವರ್ಣೀಯರು ಟ್ರ್ಯಾಕ್ಟರುಗಳ ಮೆರವಣಿಗೆಯಲ್ಲಿ ಬಳ್ಳಾರಿಗೆ ಬಂದು ಮಂತ್ರಿ, ಶಾಸಕರು ಮತ್ತು ಲೋಕಸಭಾ ಸದಸ್ಯೆ ಬಸವರಾಜೇಶ್ವರಿ ಅವರಿಗೆ ಮನವಿ ಮಾಡಿಕೊಂಡರು.

ಪ್ರಗತಿಪರ ಮನೋಭಾವದ ಜಿಲ್ಲೆಯ ಉಸ್ತುವಾರಿ ಸಚಿವ ಎಂ.ಪಿ. ಪ್ರಕಾಶ್ ಭರಣಿಯವರ ಕಾರ್ಯಕ್ಕೆ ಬೆಂಬಲ ಸೂಚಿಸಿದರು. ಆದರೆ ಬಸವರಾಜೇಶ್ವರಿ ಮಾತ್ರ "ಅನೇಕ ವರ್ಷಗಳಿಂದ ನಡೆದು ಬಂದಿರುವ ಆಚರಣೆಯನ್ಯಾಕೆ ನಿಲ್ಲಿಸುತ್ತೀರಿ? ತಡೆಯಲು ಹೋದರೆ ದೊಡ್ಡ ಗಲಾಟೆ ಆಗುತ್ತೆ. ಚಂದ್ರಗುತ್ತಿಯಲ್ಲಿ ಆದದ್ದು ಗೊತ್ತಲ್ಲ !" ಎಂದು ಭರಣಿಯವರಿಗೆ ಫೋನಿನಲ್ಲಿ ಹೇಳಿ ಹೆದರಿಸಲು ನೋಡಿದರು.

**"ಜೀತಗಾರನಾಗಿರಬೇಕಾಗಿತ್ತು"**

ಅದಕ್ಕೆ ಭರಣಿಯವರು ನೀಡಿದ ಉತ್ತರ: **"ಹಿಂದಿನಂತೆ ಎಲ್ಲವೂ ಮುಂದುವರಿಯ ಬೇಕಾಗಿದ್ದರೆ ನಾನೀವೊತ್ತು ನಿಮ್ಮ ಜಿಲ್ಲೆಯ ಎಸ್ ಪಿ. ಆಗುತ್ತಿರಲಿಲ್ಲ,** ಬದಲಾಗಿ ನಿಮ್ಮ ಮನೆಯಲ್ಲಿ ಜೀತಗಾರನಾಗಿರಬೇಕಿತ್ತು. ಯಾರು ಎಷ್ಟೇ ಅಡ್ಡಿ ಬಂದರೂ ಓಕುಳಿಯನ್ನು ನಿಲ್ಲಿಸುವುದಂತೂ ಗ್ಯಾರಂಟಿ ಇದನ್ನು ವಿರೋಧಿಸಲು ಜನರನ್ನು ಪ್ರಚೋದಿಸಿದರೆ, ಯಾರೇ ಆಗಿದ್ದರೂ, ಅವರ ಮೇಲೆ ಏನು ಕ್ರಮ ಕೈಗೊಳ್ಳಬೇಕೆಂದು ಕೂಡಾ ನಿರ್ಧರಿಸಿಯಾಗಿದೆ" ಎಂದಾಗ 'ಆಯಿತಪ್ಪ ಏನೋ ಮಾಡಿ' ಎಂದರಂತೆ.

ಆದರೆ ಇಷ್ಟಕ್ಕೇ ತೃಪ್ತರಾಗದ ಬಸವರಾಜೇಶ್ವರಿ ತಮ್ಮ ರಾಯಭಾರಿಯಾಗಿ ಸಮಾಜಕಲ್ಯಾಣ ಮಂಡಳಿಯ ಬಳ್ಳಾರಿ ಉಸ್ತುವಾರಿಕೆಯ ಬೆಂಗಳೂರಿನ ಕಾಂಗ್ರೆ ಷೋಕೇಸ್ ಪೀಸ್ ಶ್ರೀಮತಿ ಇಂದೂಕೃಷ್ಣಪ್ಪ ಎಂಬ ಬಾಬ್‌ಕಟ್ ಮಹಿಳೆಯನ್ನು ಭರಣಿಯವರ ಬಳಿ ಮಾತುಕತೆಗೆ ಕಳುಹಿಸಿದರು.

ಅಂದು ಯುಗಾದಿ ದಿನ. ಕೆಲವು ಸ್ನೇಹಿತರೊಡನೆ ಭರಣಿ ಯವರು ಮಾತನಾಡುತ್ತಿದ್ದಾಗ ಅವರ ಮನೆಗೆ ಈ 'ಷೋಕಿ ಸಮಾಜ ಸೇವಕಿ' ಬಂದು "ನೀವು ತಿಳಿದುಕೊಂಡಂತೆ ಓಕುಳಿಯಲ್ಲಿ ಅಂತಹದ್ದೇನು ನಡೆಯುವುದಿಲ್ಲವಂತೆ. ಸುಮ್ಮನೆ ಯಾಕೆ ಲಾ ಅಂಡ್ ಆರ್ಡರ್ ಪ್ರಾಬ್ಲಮ್ ತಂದುಕೊಳ್ಳುತ್ತೀರಿ" ಎಂದು ಅರ್ಧಗಂಟೆ ಹೆಣಗಾಡಿದರು.

**ಷೋಕಿ ಸಮಾಜ ಸೇವಕಿಗೆ 'ಶಾಕ್'!**

ಆಕೆಗೆ ಸಂಯಮದಿಂದ ಎಷ್ಟೇ ಉತ್ತರ ಕೊಟ್ಟರೂ ಪ್ರಯೋಜನವಾಗದೇ ಹೋದಾಗ ಭರಣಿ ನೀಡಿದ ಉತ್ತರ: "ಪೋಲೀಸ್ ಅಧಿಕಾರಿಯಾಗಿ ನನಗೀಗ 12 ವರ್ಷ ಆಗಿದೆ. ಏನು ಕ್ರಮ ತೆಗೆದುಕೊಳ್ಳಬೇಕು, ಅದನ್ನು ಹೇಗೆ ತಡೆಯಬೇಕೆಂಬುದು ನನಗೆ ಗೊತ್ತು. ನಿಮಗೆ ಎಷ್ಟೇ ಹೇಳಿದರೂ ದಲಿತರ ಅಥವಾ ಹಳ್ಳಿಯ ಬದುಕು ಅರ್ಥವಾಗೋದಿಲ್ಲ ನಿಮ್ಮ ಉಪದೇಶ ಬೇಕಾಗಿಲ್ಲ. ನೀವಿಲ್ಲಿಂದ ಹೊರಡಬಹುದು ಆದರೆ ಜನರನ್ನು ಪ್ರಚೋದಿಸಲು ಹೋದರೆ ನಿಮ್ಮನ್ನು ಬಿಡುವುದಿಲ್ಲ. ಒಳಕ್ಕೆ ಹಾಕುತ್ತೇನೆ" ಎಂದು ಸ್ವಲ್ಪ ಗಡುಸಾಗಿ ಹೇಳಿದಾಗ, ಆಕೆ ಬೆಚ್ಚಿಬಿದ್ದವಳಂತೆ ತನ್ನ ಜೊತೆ ಬಂದಿದ್ದ ಮಹಿಳೆಯೊಡನೆ 'ಬರುತ್ತೇನೆ' ಎಂದು ಕಾಲುಕಿತ್ತರು.

**ಬಿಗಿ ಬಂದೋಬಸ್ತ್**

ಕಲ್ಲುಂಬ ಒಂದು ಕುಗ್ರಾಮ. ಆದರೆ ಮುದ್ದಟನೂರು ಸುಮಾರು ಮೂರು ಸಾವಿರ ಜನಸಂಖ್ಯೆ ಉಳ್ಳದ್ದು. ಜಿಲ್ಲೆಯ ಬಹುಪಾಲು ಪೋಲೀಸು ಸಿಬ್ಬಂದಿ ಮತ್ತು ಬೆಂಗಳೂರಿನಿಂದ ಎರಡು ತುಕ್ಕಡಿ ಕೆ.ಎಸ್.ಆರ್‌ಪಿ. ಎರಡೂ ಊರುಗಳಲ್ಲೂ ಬಿಡಾರ ಹೂಡಿತ್ತು. ಯುಗಾದಿಯ ಮರುದಿನ ಓಕುಳಿ ನಡೆಯದಂತೆ ಪೋಲೀಸರು ಇತರ ಇಲಾಖೆಗಳ ಅಧಿಕಾರಿ ಸಿಬ್ಬಂದಿಯ ನೆರವಿನಿಂದ ಯಶಸ್ವಿಯಾಗಿ ನಿರ್ಬಂಧಿಸಿದರು. **ಅನೇಕ ಸವರ್ಣೀಯ ಗಂಡಸರು ಬಂಧನದ ಹೆದರಿಕೆಯಿಂದ ಊರಿನಿಂದ ಪರಾರಿಯಾಗಿದ್ದರು.**

**ಜನತೆಯ ಮನ ಗೆದ್ದರು**

ಸುಭಾಷ್ ಭರಣಿ ಮತ್ತು ವಿಶೇಷ ಜಿಲ್ಲಾಧಿಕಾರಿ ನಾಯಕ್ ಅಂದು ಉಸ್ತುವಾರಿಕೆ ನಡೆಸಿ, "ಹಿಂದೂ ಸಂಸ್ಕೃತಿಯಲ್ಲಿ ಪವಿತ್ರವಾಗಿ ಕಾಣುವ ಹೆಣ್ಣನ್ನು ದೇವರ ಹೆಸರಲ್ಲಿ ಅವಮಾನಗೊಳಿಸುವ ಸಂಪ್ರದಾಯ ಬಿಡಿ. ಈ ಆಚರಣೆಯ ಬದಲು ತೇರು ಎಳೆಯುವ ಮೂಲಕ ಜಾತ್ರೆಯನ್ನು ವಿಜೃಂಭಣೆಯಿಂದ ಮಾಡಿ" ಎಂದು ಜನರ ಮನ ಒಲಿಸಿದರು. ಈ ವರ್ಷವೇ 50 ಸಾವಿರ ರೂಪಾಯಿ ಖರ್ಚಿನಲ್ಲಿ ಮುದ್ದಟನೂರಿಗೆ ಒಂದು ಹೊಸ ತೇರನ್ನು ಮತ್ತು ಕಲ್ಲುಂಬದಲ್ಲಿ ವ್ಯಾಯಾಮಶಾಲೆಯೊಂದನ್ನು ಕಟ್ಟಿಸಿಕೊಡುವುದಾಗಿ ವಿಶೇಷ ಜಿಲ್ಲಾಧಿಕಾರಿ ಭರವಸೆ ಕೊಟ್ಟಾಗ ಜನ ಖುಷಿಪಟ್ಟರು.

(ಸೌಜನ್ಯ: 'ಸುದ್ದಿ ಸಂಗಾತಿ')

**ಚಂದ್ರಗುತ್ತಿಯಲ್ಲೂ ಸಾಧ್ಯವಿತ್ತು**

ಚಂದ್ರಗುತ್ತಿಯಲ್ಲಾದರೆ ನಿಜವಾಗಿಯೂ ಭಕ್ತರು, ಅದರಲ್ಲೂ ಬಡವರು, ದುರ್ಬಲ ಜಾತಿಗಳವರು, ನಿಷ್ಕಲ್ಮಷ ಮನಸ್ಸಿನಿಂದ ತಾವೇ ಬೆತ್ತಲಾಗುವುದು; ಅದೇ ಈ ಎರಡು ಗ್ರಾಮಗಳಲ್ಲಿ ಕಾಮಾಂಧ, ವಿಕೃತ ಮನಸ್ಸಿನ **ಬಲಿಷ್ಠ ಜಾತಿಗಳ** ಗಂಡುಗಳು ಬೇರೆ ಹೆಣ್ಣುಗಳನ್ನು ಪುಕ್ಕಟೆ ಕಾಮಕೇಳಿಗೆ ಎಳೆಯುವುದು. ಇಂಥ ಕಡೆಯೇ, ಚಂದ್ರಗುತ್ತಿ ರಾದ್ಧಾಂತ ನಡೆದು ಕೇವಲ ಹದಿನೈದಿಪ್ಪತ್ತು ದಿನದೊಳಗೇ, ಅದೇ ರೀತಿ ತಲೆತಲಾಂತರದಿಂದ ಬಂದ 'ಧಾರ್ಮಿಕ ಸಂಪ್ರದಾಯ'ವೊಂದನ್ನು ನಿಲ್ಲಿಸಲು ಸಾಧ್ಯವಿರುವಾಗ, ಚಂದ್ರಗುತ್ತಿಯಲ್ಲಿ ಸಾಧ್ಯವಿರಲಿಲ್ಲವೆ? ಈ ವರ್ಷ ಮೂಗು-ಬಾಯಿ ಒತ್ತಿ ಹಿಡಿದುದಕ್ಕೆ ಮಾತ್ರ ಮಣಿಸಲು ಸಾಧ್ಯವಾದುದೆ? ಕಳೆದ ವರ್ಷದಂತೆ ಅಷ್ಟೊಂದು ವ್ಯಾಪಕವಾಗಿ ಮನವೊಲಿಸುವ ಚಟುವಟಿಕೆಯ ಬೆನ್ನಿಗೆ ಇಂಥದೊಂದೆರಡು ಜನ ಧೀರ–ನೇರ ಮನಸ್ಸಿನ ಅಧಿಕಾರಿಗಳೂ ಇದ್ದಿದ್ದರೆ?

* * *

ಇನ್ನು ಚಂದ್ರಗುತ್ತಿಯಲ್ಲಿ ದಲಿತ ಸಂಘರ್ಷ ಸಮಿತಿ ಮತ್ತು ವಿಶ್ವ ಹಿಂದೂ ಪರಿಷತ್ತಿನವರ ಪಾತ್ರಗಳ ಬಗ್ಗೆ ಚೆನ್ನವೀರಪ್ಪ ಆಯೋಗದ ವಿಚಾರಣೆ ವೇಳೆ, ಆದರ ವರದಿಯಲ್ಲಿ ಹಾಗೂ ಕಳೆದ ವರ್ಷ ಪತ್ರಿಕೆಗಳಲ್ಲಿ ಪ್ರಸ್ತಾಪಿಸಲ್ಪಟ್ಟಿದೆ. ಈ ಬಗ್ಗೆ ಮುಂದೆ ಸ್ವಲ್ಪ ವಿವೇಚಿಸೋಣ.

—ಸಿರಿಮನೆ ನಾಗರಾಜ್

## ದ್ವಿತೀಯ ರಾಜ್ಯ ಮಟ್ಟದ ನಾಟಕ ಸ್ಪರ್ಧೆ

ಜಯಪುರ: ಇಲ್ಲಿನ ಭಾರತೀಯ ಕಲಾ ಸಂಘದ ಆಶ್ರಯದ ದ್ವಿತೀಯ ರಾಜ್ಯಮಟ್ಟದ ನಾಟಕ ಸ್ಪರ್ಧೆ ಏಪ್ರಿಲ್ 2ನೇ ವಾರ ನಡೆಯಲಿದೆ.

ಪ್ರಥಮ ಬಹುಮಾನವಾಗಿ "ಮಲೆನಾಡು ರಿಕ್ರಿಯೇಶನ್ ಸೆಂಟರ್" ಪರ್ಯಾಯ ಫಲಕದೊಂದಿಗೆ ಒಂದು ಸಾವಿರ ರೂ., 2ನೇ ಬಹುಮಾನ 500ರೂ., 3ನೇ ಬಹುಮಾನ 250ರೂ. ಹಾಗೂ ಇನ್ನಿತರ ಹಲವು ಬಹುಮಾನಗಳನ್ನಿಡಲಾಗಿದೆ

ಈ ಸ್ಪರ್ಧೆಗಳಿಗೆ ರಾಜ್ಯಾದ್ಯಂತದ ಹವ್ಯಾಸಿ ನಾಟಕ ತಂಡಗಳನ್ನು ಆಹ್ವಾನಿಸಲಾಗಿದ್ದು, ಹೆಚ್ಚಿನ ವಿವರ ಹಾಗೂ ಪ್ರವೇಶ ಪತ್ರಗಳಿಗಾಗಿ ಕಾರ್ಯದರ್ಶಿ. ಭಾರತೀಯ ಕಲಾ ಸಂಘ, ಜಯಪುರ, ಚಿಕ್ಕಮಗಳೂರು ಜಿಲ್ಲೆ–ಈ ವಿಳಾಸದೊಂದಿಗೆ ವ್ಯವಹರಿಸಲು ಕೋರಲಾಗಿದೆ.

## ...ಸಿ ಅಂಡ್ ಡಿ' ವಿರುದ್ಧ ...ತಿಭಟನೆ ತೀವ್ರಗೊಳಿಸಲು ...ೊಪ್ಪ ತಾ|| ಬಿಜೆಪಿ ಸಜ್ಜು

...ಹರಿಹರಪುರ: ಕೊಪ್ಪ ತಾಲ್ಲೂಕಿನಾ...ತ ಅರಣ್ಯ ಇಲಾಖೆಯುವರು ನಡೆಸಿರುವ ...ಅಂಡ್ ಡಿ' ಭೂಮಿಯ ಸರ್ವೆಯಿಂದ ...ರಿಗೆ ತುಂಬ ಅನ್ಯಾಯುವಾಗುತ್ತಿದ್ದು ...ರ ವಿಧಾನ ಮಂಡಲದಲ್ಲಿ ಕೊಟ್ಟ ...ಸನೆಗಳನ್ನೂ, ಸಾಗರ ತಾಲ್ಲೂಕಿನ ...ರಣಗಳ ಹಿನ್ನೆಲೆಯಲ್ಲಿ ಹೈಕೋರ್ಟ್ ...ರುವ ಆಜ್ಞೆಯನ್ನೂ ಉಲ್ಲಂಘಿಸಿದೆ. ಹಾ...ೀ 'ಕಿಸಾನ್ ನರ್ಸರಿ' ಎಂಬ ನೆಪದಲ್ಲಿ ...ರ್ನಂಥವರ ಕೈಗಾರಿಕೆಗಳಿಗೆ-ಬೇಕಾದ ...ೃ ಬೆಳೆವ ಮರಗಳನ್ನು ಈಗ ರೈತರಿಂದ ...ಬೆಳೆಸಿ, ರೈತರನ್ನು ಒಡೆದು ಆಳುವ ನೀ...ನ್ನು ಸರ್ಕಾರ ಅನುಸರಿಸುತ್ತಿದೆಯಲ್ಲ ...ವ್ಯಾಪಕವಾದ ಭ್ರಷ್ಟಾಚಾರಕ್ಕೂ ಅವ...ಕಲ್ಪಿಸಿದೆ ಎಂದು ಕೊಪ್ಪ ತಾ|| ಬಿಜೆಪಿ ...ಕ್ಷ ರಘುನಾಥ್ ಆಪಾದಿಸಿದ್ದಾರೆ.

...ಇವುಗಳ ವಿರುದ್ಧ ತಮ್ಮ ಪಕ್ಷವು ಪ್ರತಿ...ನೆಯನ್ನು ತೀವ್ರಗೊಳಿಸಲಿದ್ದು ಇದಕ್ಕೆ ...ಪಕ್ಷಗಳ ಸಹಕಾರವನ್ನು ಆಹ್ವಾನಿಸಲು ...ತ್ತು ಕಾರ್ಯಕ್ರಮ ರೂಪಿಸಲು ಸದ್ಯದ ...ಸಭೆ ಕರೆಯುವುದಾಗಿ ಅವರು ತಿಳಿಸಿ...ರೆ.

## ...ಮ್ಯಾಮ್ಕೋಸ್‌ನಲ್ಲಿ ಏಲಕ್ಕಿ ...ುತ್ತು ಮೆಣಸು ವ್ಯಾಪಾರ

ಶಿವಮೊಗ್ಗ: ಮಲೆನಾಡು ಅಡಿಕೆ ಮಾ...ಟದ ಸಹಕಾರ ಸಂಘ (ಮ್ಯಾಮ್ಕೋಸ್) ...ರು ದಿನಾಂಕ 21.3.87ನೇ ಶನಿವಾರ ...ಡ್ಡ ಪ್ರಮಾಣದಲ್ಲಿ ಏಲಕ್ಕಿ ಮತ್ತು ...ಣಸು ವ್ಯಾಪಾರದ ವ್ಯವಸ್ಥೆ ಮಾಡಿದ್ದು, ...ಗಾರ ಬಾಂಧವರು ಇದರ ಲಾಭ ಪಡೆ...ಬೇಕಾಗಿ ಕೋರಲಾಗಿದೆ. ದಿನಾಂಕ ...2.87ರ ಏಲಕ್ಕಿ ವ್ಯಾಪಾರದ ಧಾರಣೆ:

| | | |
|---|---|---|
| ...ತ್ತಮ ರಾಶಿ ಕಾಯಿ | ರೂ. | 140–151 |
| ...ಶಿ ಕಾಯಿ | " | 90–127 |
| ...ಧಾರಣ ಕಾಯಿ | " | 30–110 |

## ರಾಜ್ಯ ಮಟ್ಟದ ಕೆಸರು ಗದ್ದೆ ಓಟ ಸ್ಪರ್ಧೆ

ಕೊಪ್ಪ : ಚಿಕ್ಕಮಗಳೂರಿನ ನೆಹರು ...ುವಕ ಕೇಂದ್ರ ಹಾಗೂ ಕೊಪ್ಪ ತಾ...ಲ್ಲೂಕು ಹಿರೇಗದ್ದೆಯ ಯುವಕ ಸಂಘದ ...ಯುಕ್ತ ಆಶ್ರಯದಲ್ಲಿ 22–3–1987 ...ಭಾನುವಾರ ಹಿರೇಗದ್ದೆಯಲ್ಲಿ 3ನೇ ...ಜ್ಯ ಮಟ್ಟದ ಕೆಸರುಗದ್ದೆ ಓಟದ ಸ್ಪರ್ಧೆ ...ಟ್ಟಿದೆ.

ಈ ಸ್ಪರ್ಧೆಯಲ್ಲಿ ಭಾಗವಹಿಸಬಯಸುವ ...ುವಕರು – ಯುವತಿಯರು **20.3.87ರ** ...**5 ಗಂಟೆಯೊಳಗಾಗಿ** ತಮ್ಮ ಪ್ರವೇಶ ...ತ್ರಗಳನ್ನು ಯುವಜನ ಸಂಯೋಜಕರು, ...ಹರು ಯುವಕ ಕೇಂದ್ರ, ಚಿಕ್ಕಮಗಳೂರು ...ರಿಗೆ ಕಳುಹಿಸಿ, **ದಿನಾಂಕ 22.3.87** ...**ಬೆಳಿಗ್ಗೆ 10.30 ಗಂಟೆಯೊಳಗಾಗಿ** ...**ರೇಗದ್ದೆ ಗ್ರಾಮಕ್ಕೆ ಬರತಕ್ಕದ್ದು.** ...ರ್ಧೆಗಳಿಗೆ ಪ್ರವೇಶ ಶುಲ್ಕವಿಲ್ಲ. ಸ್ಪರ್ಧೆಗೆ ...ದು ಹೋಗುವ ವೆಚ್ಚವನ್ನು ಅಭ್ಯರ್ಥಿ...ೇ ಭರಿಸಿ ಕೊಳ್ಳಬೇಕು. ಸ್ಪರ್ಧಿಗಳಿಗೆ ...ೇಗದ್ದೆ ಗ್ರಾಮದಲ್ಲಿ ಉಚಿತ ಊಟ ...ತ್ತು ವಸತಿ ಸೌಕರ್ಯ ಏರ್ಪಡಿಸಲಾ...ಗುವುದು.

ಸ್ಪರ್ಧೆಗಳಲ್ಲಿ ವಿಜೇತರಾದವರಿಗೆ ಆಕರ್ಷಕ ಬಹುಮಾನ ಹಾಗೂ ಪ್ರಶಸ್ತಿ ಪತ್ರಗಳನ್ನೂ, ಸ್ಪರ್ಧೆಯಲ್ಲಿ ಭಾಗವಹಿಸುವ ಪ್ರತಿಯೊಬ್ಬರಿಗೂ ಪ್ರಶಸ್ತಿ ಪತ್ರವನ್ನೂ ನೀಡಲಾಗುವುದು.

ಹೆಚ್ಚಿನ ವಿವರಗಳನ್ನ ಚಿಕ್ಕಮಗಳೂರಿನ ನೆಹರು ಯುವಕ ಕೇಂದ್ರದಿಂದ ಪಡೆಯಬಹುದೆಂದು ಯುವಜನ ಸಂಯೋಜಕ ಆರ್. ಚಲುವರಾಜ್ ತಿಳಿಸಿದ್ದಾರೆ.

(ಕಳೆದವರ್ಷ ಶೃಂಗೇರಿ ತಾ|| ಪಡುಬೈಲಿನಲ್ಲಿ ಸ್ಪರ್ಧೆಗಳು ನಡೆದಾಗ ಸ್ಪರ್ಧಿಗಳಿಗೆ ಸ್ಪರ್ಧೆಯ ಆರಂಭದ ಸೂಚನೆಗಳ(ಕಾಲ್ಸ್) ಬಗ್ಗೆ ಯದ್ವಾ ತದ್ವಾ ಗೊಂದಲವುಂಟಾಗಿತ್ತು. ಪ್ರತಿಯೊಂದು ಸ್ಪರ್ಧೆಯಲ್ಲೂ ಸ್ಪರ್ಧಿಗಳು ನಾಲ್ಕೈದು ಬಾರಿ ಅರ್ಧರ್ಧ ದೂರ ಓಡಿದಾಗ ಅವರನ್ನು ನಿಲ್ಲಿಸಲಾಗುತ್ತಿತ್ತು.)

ಈ ಸೂಚನೆಗಳ ಬಗ್ಗೆ ಗ್ರಾಮೀಣ ಸ್ಪರ್ಧಾಳುಗಳಿಗೆ ಅಭ್ಯಾಸ ಇಲ್ಲದಿರುವ ಸಂಭವವಿರುವುದರಿಂದ ಈ ಬಾರಿ ಅವರಿಗೆ ಈ ಕುರಿತು ಮೊದಲೇ ಸಾಕಷ್ಟು ಅಭ್ಯಾಸ ಕೊಟ್ಟು ಸ್ಪರ್ಧೆಗಿಳಿಸಬೇಕೆಂದು ವ್ಯವಸ್ಥಾಪಕರಿಗೆ ಸೂಚಿಸುತ್ತೇವೆ. —ಸಂ.)

### ಯುವಜನ ಸಂಘಗಳ ಆಶ್ರಯದಲ್ಲಿ ಏ. 20ರಂದು

## ಕೊಪ್ಪದಲ್ಲಿ ಸಾಮೂಹಿಕ ವಿವಾಹ

ಕೊಪ್ಪ: ಇಲ್ಲಿನ ಬಾಳಗಡಿಯಲ್ಲಿರುವ ವಿದ್ಯಾಮಹಿಳಾ ಸಮಾಜ, ಚೇತನಾ ಯುವತಿ ಮಂಡಳಿ ಹಾಗೂ ಹಿರೇಗದ್ದೆ ಯುವಕ ಸಂಘದ ಆಶ್ರಯದಲ್ಲಿ ದಿನಾಂಕ 20.5.87 ರಂದು ಸಾಮೂಹಿಕ ವಿವಾಹವನ್ನು ಏರ್ಪಡಿಸಲಾಗಿದೆ. ಈ ಸಾಮೂಹಿಕ ಸಮಾರಂಭದಲ್ಲಿ ವಿವಾಹವಾಗಲಿಚ್ಛಿಸುವ ವಧೂವರರು ದಿನಾಂಕ 5.4.1987ರ ಒಳಗಾಗಿ ತಮ್ಮ ಹೆಸರನ್ನು ಈ ಕೆಳಗಿನ ಯಾವುದಾದರೊಂದು ವಿಳಾಸದಲ್ಲಿ ನೋಂದಾಯಿಸಿಕೊಳ್ಳಬೇಕು. 1) ವಿದ್ಯಾಮಹಿಳಾ ಸಮಾಜ ಹಾಗೂ ಚೇತನಾ ಯುವತಿ ಮಂಡಳಿ, ಬಾಳಗಡಿ, ಕೊಪ್ಪ; 2) ಹಿರೇಗದ್ದೆ ಯುವಕ ಸಂಘ, ಹಿರೇಗದ್ದೆ, ಕೊಪ್ಪ ತಾ||; ಅಥವಾ 3) ಯುವಜನ ಸೇವಾ ಮತ್ತು ಕ್ರೀಡಾಧಿಕಾರಿಗಳು, ಯುವಜನ ಕೇಂದ್ರ, ಹಳೇ ಆಸ್ಪತ್ರೆ ಕಟ್ಟಡ, ಕೊಪ್ಪ.

ತಾಳಿ, ಸೀರೆ-ಖಣ, ಪಂಚೆ–ಮೇಲು ವಸ್ತ್ರ, ಹಾರ ಇವನ್ನು ಕೊಡಲಾಗುವುದು. (ಬಾಸಿಂಗ ಮತ್ತು ಕಾಲುಂಗುರ ಬೇಕಿದ್ದವರು ತಾವೇ ತಂದುಕೊಳ್ಳಬೇಕು.) ಯಾವುದೇ ಕಾರಣಕ್ಕೆ ಎರಡನೇ ಮದುವೆಗೆ ಆಸ್ಪದ ಇರುವುದಿಲ್ಲ.

ಮದುವೆ ನಡೆಯುವ ಸ್ಥಳ: **ಮಲ್ಲಿಕಾರ್ಜುನ ದೇವಸ್ಥಾನ, ಚಿಟ್ಟೆಮಕ್ಕಿ, ಕೊಪ್ಪ.**

ಈ ಕಾರ್ಯದಲ್ಲಿ ಚಿಕ್ಕಮಗಳೂರು ಜಿಲ್ಲೆಯ ಎಲ್ಲಾ ಯುವಜನ ಸೇವಾ ಮತ್ತು ಕ್ರೀಡಾಧಿಕಾರಿಗಳು ಹಾಗೂ ಜಿಲ್ಲೆಯಲ್ಲಿರುವ ಎಲ್ಲಾ ಯುವಕ ಸಂಘ, ಯುವತಿ ಮಂಡಳಿಯವರೂ ಸಹಕರಿಸಬೇಕೆಂದು ಸಾಮೂಹಿಕ ವಿವಾಹ ಸಮಿತಿ ಕೋರಿದೆ.

## ಏಲಕ್ಕಿ ಧಾರಣೆ

ಸಕಲೇಶಪುರ: ಮಾ. 5–ಏಲಕ್ಕಿ ಕೆ.ಜಿ. ಧಾರಣೆ ಆರಿಸಿದ್ದು ರೂ. 180ರಿಂದ 200 ಜರಡಿ ರೂ. 160 ರಿಂದ 180, ಉತ್ತಮ ರಾಶಿ ರೂ. 130 ರಿಂದ 140, ರಾಶಿ ರೂ. 110ರಿಂದ 120, ಕೊಳೆ ರೂ. 80 ರಿಂದ 90, ಬೀಜ ರೂ. 75 ರಿಂದ 90, ಹಸಿರು ಉತ್ತಮ ರೂ. 120ರಿಂದ 130, ಹಸಿರು ರೂ. 80ರಿಂದ 100.

## ಸಣ್ಣ ಕಾಫಿ ಬೆಳೆಗಾರರಿಗೆ ಮಾಹಿತಿ ಕಾರ್ಯಕ್ರಮ

ಬಿಳಾಲ್‌ಕೊಪ್ಪ: ಇಲ್ಲಿನ ಜೇಸೀಸ್, ಕೃಷಿ ವಿಚಾರ ವಿನಿಮಯ ಕೇಂದ್ರ ಮತ್ತು ಸಿಂಡಿಕೇಟ್ ಬ್ಯಾಂಕುಗಳ ಸಂಯುಕ್ತ ಆಶ್ರಯದಲ್ಲಿ ಸಣ್ಣ ಕಾಫಿ ಬೆಳೆಗಾರರಿಗೆ ಕಾಫಿ ಕೊಯ್ಲು, ತೂಕ, ಒಣಗಿಸುವಿಕೆ, ಲೆಕ್ಕ ಇಡುವಿಕೆ ಹಾಗೂ ಟಿಪಿ–3 ಲೆಕ್ಕ ಬರೆಯುವಿಕೆ— ಇವುಗಳ ಬಗ್ಗೆ ಮಾಹಿತಿ ಕಾರ್ಯಕ್ರಮ ಫೆ. 22ರಂದು ನಡೆಯಿತು. ಟಿ.ಒ. ಥಾಮಸ್, ಎನ್. ಎಲ್. ನಾಗಭೂಷಣ್, ಎಸ್. ಎಸ್. ಶೆಟ್ಟಿ ಮಾಹಿತಿ ನೀಡಿದರು. ಎಂ.ಆರ್. ರಂಗನಾಥ್ ಕಾಫಿ ಬೆಳೆಯ ಅನುಭವಗಳನ್ನೂ, ಜಗದೀಶ್ ಗಚ್ಚಿನಮಠ ಬ್ಯಾಂಕ್ ಸೌಲಭ್ಯಗಳನ್ನೂ ವಿವರಿಸಿದರು.

**ಸಾಗರ ಅಡಿಕೆ ತಾ|| 7.3.87**

ಇಡಿ ಅಡಿಕೆ ರೂ. 1603–1899
ಆಪಿ ರೂ. 2989–3389
ಚಾಲಿ 1278–1419
ಸಿಪ್ಪೆಗೋಟು ರೂ. 409–610